# ಕರ್ನಾಟಕ ವಿಧಾನಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 30 |
| ಸದಸ್ಯರ ಹೆಸರು | ಶ್ರೀ ಪ್ರಕಾಶ ಕೆ. ರಾಥೋಡ್ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 21-09-2020 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು |

<table>
<tr><th>ಪ್ರಶ್ನೆ</th><th>ಉತ್ತರ</th></tr>
<tr><td>ಅ) ಸರ್ಕಾರಿ ಅನುದಾನಿತ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಖಾಲಿಯಿರುವ ಬೋಧಕರು ಮತ್ತು ಬೊಧಕೇತರ ಹುದ್ದೆಗಳ ಸಂಖ್ಯೆ ಎಷ್ಟು; (ವಿವರ ನೀಡುವುದು)</td><td>ಅನುದಾನಿತ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಖಾಲಿಯಿರುವ ಬೋಧಕ ಮತ್ತು ಬೊಧಕೇತರ ಹುದ್ದೆಗಳ ವಿವರಗಳು ಈ ಕೆಳಕಂಡಂತಿವೆ.<br><br>
<table>
<tr><th colspan="4">ಸರ್ಕಾರಿ ಅನುದಾನಿತ ಶಾಲೆಗಳು</th></tr>
<tr><th colspan="2">ಪ್ರಾಥಮಿಕ</th><th colspan="2">ಪ್ರೌಢ</th></tr>
<tr><th>ಬೋಧಕ</th><th>ಬೋಧಕೇತರ</th><th>ಬೋಧಕ</th><th>ಬೋಧಕೇತರ</th></tr>
<tr><td>1379</td><td>-</td><td>4474</td><td>1028</td></tr>
</table></td></tr>
<tr><td>ಆ) ಬೋಧಕರಿಲ್ಲದ ಕಾರಣ ಶಿಕ್ಷಣದ ಗುಣಮಟ್ಟ ಕಡಿಮೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಬಂದಿದೆ</td></tr>
<tr><td>ಇ) ಬೋಧಕರ ಹುದ್ದೆ ಖಾಲಿ ಇದ್ದಲ್ಲಿ, ಈ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಏನು ಕ್ರಮ ಕೈಗೊಂಡಿದೆ? (ವಿವರ ನೀಡುವುದು)</td><td>ಸರ್ಕಾರಿ ಆದೇಶ ಸಂಖ್ಯೆ:ಇಡಿ 14 ಎಸ್.ಇ.ಪಿ 2017, ದಿನಾಂಕ:06.03.2019ರಲ್ಲಿ ಈಗಾಗಲೇ ದಿನಾಂಕ:31.12.2015ರ ವರೆಗೆ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಲಾಗಿತ್ತು. ಈಗಾಗಲೇ ಸಾಕಷ್ಟು ಹುದ್ದೆಗಳನ್ನು ಭರ್ತಿ ಮಾಡಲಾಗಿದೆ.<br>ಪ್ರಸ್ತುತ ಕೋವಿಡ್-19ರ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯಿಂದ ಆರ್ಥಿಕ ಮಿತವ್ಯಯ ಸಾಧಿಸುವ ಸಲುವಾಗಿ ಈ ಕೆಳಕಂಡಂತೆ ಕ್ರಮಕೈಗೊಳ್ಳಲು ಸೂಚಿಸಿದೆ.<br>• 2020-21ನೇ ಸಾಲಿನಲ್ಲಿ ಯಾವುದೇ ಹೊಸ ಅನುದಾನರಹಿತ ವಿದ್ಯಾ ಸಂಸ್ಥೆಗಳನ್ನು ವೇತನಾನುದಾನಕ್ಕೊಳಪಡಿಸುವಂತಿಲ್ಲ.<br>• ಅನುದಾನಿತ ಸಂಸ್ಥೆಗಳಲ್ಲಿ ನಿವೃತ್ತಿ, ನಿಧನ, ರಾಜೀನಾಮೆ ಇತರೆ ಯಾವುದೇ ಕಾರಣಗಳಿಂದ ಖಾಲಿ ಉಂಟಾಗುವ ಹುದ್ದೆಗಳನ್ನು 2020-21ನೇ ಸಾಲಿನಲ್ಲಿ ಭರ್ತಿ ಮಾಡುವಂತಿಲ್ಲ. ಸದರಿ ನಿಯಮವು ಈಗಾಗಲೇ ಭರ್ತಿ ಮಾಡಲು ಆರ್ಥಿಕ ಇಲಾಖೆಯು ಸಹಮತಿಸಿರುವ ಪ್ರಕರಣಗಳಿಗೂ ಸಹ ಅನ್ವಯಿಸತಕ್ಕದ್ದು.<br>• ಅನುದಾನಿತ ಸಂಸ್ಥೆಗಳಲ್ಲಿ ಖಾಲಿ ಉಂಟಾಗುವ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಹೊಸದಾಗಿ ಸಹಮತಿ ನೀಡುವಂತಿಲ್ಲ.<br>• ಈ ಎಲ್ಲಾ ನಿಯಮಗಳು ಸರ್ಕಾರದ ಎಲ್ಲಾ ಇಲಾಖೆಗಳಡಿಯಲ್ಲಿ ಬರುವ ಅನುದಾನಿತ ಶಿಕ್ಷಣ ಸಂಸ್ಥೆಗಳಿಗೆ/ವಸತಿ ನಿಲಯಗಳಿಗೆ ಹಾಗೂ ಈಗಾಗಲೇ</td></tr>
</table>

| | |
|---|---|
| | ವೇತನಾನುದಾನಕ್ಕೊಳಪಡಿಸಲು ಸ್ವೀಕೃತಗೊಂಡಿರುವ ಮತ್ತು ಸ್ವೀಕೃತಗೊಳ್ಳುವ ಅನುದಾನಿತ ಶಿಕ್ಷಣ ಸಂಸ್ಥೆಗಳು ಸೇರಿದಂತೆ, ಇನ್ನುಳಿದ ಅನುದಾನಿತ ಸಂಸ್ಥೆಗಳಿಗೂ ಸಹ ಅನ್ವಯಿಸತಕ್ಕದ್ದು.<br><br>ಮೇಲ್ಕಂಡಂತೆ ಆರ್ಥಿಕ ಇಲಾಖೆಯು ನಿರ್ದೇಶನ ನೀಡಿರುವುದರಿಂದ ಯಾವುದೇ ಬೋಧಕ ಹಾಗೂ ಬೋಧಕೇತರ ಹುದ್ದೆಗಳನ್ನು ವೇತನಾನುದಾನಕ್ಕೊಳಪಡಿಸಲು ಸಾಧ್ಯವಾಗುತ್ತಿಲ್ಲ. ಪ್ರಸ್ತಾಪಿತ ಆರ್ಥಿಕ ಮಿತವ್ಯಯ ಆದೇಶವನ್ನು ಸಡಿಲಿಸಿದ ನಂತರ ಖಾಲಿಯಿರುವ ಅರ್ಹ ಹುದ್ದೆಗಳನ್ನು ವೇತನಾನುದಾನಕ್ಕೊಳಪಡಿಸಲು ಪರಿಶೀಲಿಸಲಾಗುವುದು. |

**ಇಡಿ 110 ಪಿಎಂಸಿ 2020.**

**[ಎಸ್.ಸುರೇಶ್ ಕುಮಾರ್]**
**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ**
**ಸಕಾಲ ಸಚಿವರು.**